# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 2465 + 2478 |
| ಸದಸ್ಯರ ಹೆಸರು | ಶ್ರೀ ಎನ್ ರವಿಕುಮಾರ್ ಹಾಗೂ<br>ಶ್ರೀ ಪಿ ಆರ್ ರಮೇಶ್ |
| ಉತ್ತರಿಸುವ ದಿನಾಂಕ | 23-03-2022 |
| ಉತ್ತರಿಸುವವರು | ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ನಗರ ಹಲಸೂರು ಪೇಟೆ ಶ್ರೀ ಧರ್ಮರಾಯ ಸ್ವಾಮಿ ದೇವಾಲಯವು ಬೆಂಗಳೂರು ನಗರ ವ್ಯಾಪ್ತಿಯಲ್ಲಿ ಹೊಂದಿರುವ ಸ್ಥಿರಾಸ್ತಿ ಎಷ್ಟು; (ಸರ್ವೆ ಸಂಖ್ಯೆಯೊಂದಿಗೆ ಮಾಹಿತಿ ನೀಡುವುದು) | ಬೆಂಗಳೂರು ನಗರ ತಿಗಳರಪೇಟೆಯಲ್ಲಿರುವ ಶ್ರೀ ಧರ್ಮರಾಯಸ್ವಾಮಿ ದೇವಾಲಯವು ಪ್ರವರ್ಗ " ಬಿ " ವರ್ಗದ ಧಾರ್ಮಿಕ ಸಂಸ್ಥೆಯಾಗಿರುತ್ತದೆ.<br><br>ಪ್ರಸ್ತಾಪಿತ ದೇವಾಲಯವು **ಬೆಂಗಳೂರು ನಗರ ವ್ಯಾಪ್ತಿಯಲ್ಲಿ ಹೊಂದಿರುವ ಸ್ಥಿರಾಸ್ತಿ ವಿವರಕ್ಕೆ ಸಂಬಂಧಿಸಿದಂತೆ ಪ್ರಸ್ತುತ ನೀಲಸಂದ್ರ ಗ್ರಾಮದ ಸರ್ವೆ ನಂಬರ್ 79 ರಲ್ಲಿರುವ 15-12 ಜಮೀನುಗಳು ಕಂದಾಯ ದಾಖಲೆಯಂತೆ ಶ್ರೀ ಧರ್ಮರಾಯಸ್ವಾಮಿ ದೇವಾಲಯದ ಹೆಸರಿನಲ್ಲಿ ಇರುತ್ತದೆ.**<br><br>ಉಳಿದಂತೆ ಈ ಕೆಳಕಂಡ ತ:ಖ್ತೆಯಲ್ಲಿ ವಿವರಿಸಿರುವಂತೆ ನೀಲಸಂದ್ರ, ಹೊಂಗಸಂದ್ರ, ಧೂಪನಹಳ್ಳಿಯಲ್ಲಿ ಗ್ರಾಮಗಳಿಗೆ ಸೇರಿದ ವಿವಿಧ ಸರ್ವೆ ನಂಬರ್‌ಗಳ ವಿಸ್ತೀರ್ಣದ ಸ್ವತ್ತುಗಳು/ಜಮೀನುಗಳು, ಇನಾಂ ಕಾಯ್ದೆ ಹಾಗೂ ವಿವಿಧ ಕಾಯ್ದೆಗಳ ಅನ್ವಯ ಗೇಣಿದಾರರಿಗೆ ಮಂಜೂರಾಗಿರುತ್ತವೆ. |

ನೀಲಸಂದ್ರ ಗ್ರಾಮ

| ಕ್ರ.ಸಂ | ಸರ್ವೆ ನಂ | ವಿಸ್ತೀರ್ಣ ಎಕರೆ-ಗುಂಟೆ | ವಿವರಗಳು |
|---|---|---|---|
| 1 | 57 | 01-03 | ಇನಾಂ ರದ್ದಿಯಾತಿ ಕಾಯ್ದೆಯಂತೆ 6 ಜನ ಖಾಯಂ ಗೇಣಿದಾರರಿಗೆ ಮಂಜೂರಾಗಿರುತ್ತದೆ. |
| 2 | 58 | 01-34 | ಇನಾಂ ರದ್ದಿಯಾತಿ ಕಾಯ್ದೆಯಂತೆ 6 ಜನ ಖಾಯಂ ಗೇಣಿದಾರರಿಗೆ ಮಂಜೂರಾಗಿರುತ್ತದೆ. |
| 3 | 74 | 02-01 | ಶ್ರೀ ಅಣ್ಣೀಯಪ್ಪ ಗೌಡ, ಶ್ರೀ ಜಯರಾಮ, ಶ್ರೀ ಕೃಷ್ಣಪ್ಪ ಇವರುಗಳು 1934-65 ಸಾಲಿನಿಂದ ಇದುವರೆಗೂ 2-03 ಎಕರೆ/ಗುಂಟೆ (ಖರಾಬು ಸೇರಿ) ಸಾಗುವಳಿ ಮಾಡುತ್ತಿರುತ್ತಾರೆ. |
| 4 | 79 | **15-12** | **ಕರ್ನಾಟಕ ರಾಜ್ಯ ಪತ್ರದಲ್ಲಿ ಧರ್ಮರಾಯ ಆಸ್ತಿಗೆ ಸಂಬಂಧಿಸಿದಂತೆ ಆಸ್ತಿ ವಿವರವು ದಿನಾಂಕ:05.05.2021ರಂದು ಪ್ರಕಟಗೊಂಡಿದ್ದು, ಅದರಂತೆ 15-12 ಎಕರೆ/ಗುಂಟೆ ಜಮೀನು ಶ್ರೀ ಧರ್ಮರಾಯ ಸ್ವಾಮಿ ದೇವಾಲಯದ ಹೆಸರಿನಲ್ಲಿರುತ್ತದೆ.** |
| 5 | 98 | 01-24 | 1966-67 ರಿಂದ 68-69ರ ಆರ್.ಟಿ.ಸಿ ಪ್ರಕಾರ ಕಲಂ 9ರ ಕಬ್ಜೆದಾರ ಅಥವಾ ಸ್ವಾಧೀನದಾರನ ಹೆಸರು ಮತ್ತು ವಿಳಾಸದಲ್ಲಿ ಸರ್ಕಾರಿ ಖರಾಬು ದೋಬಿ ಘಾಟ್ ಮಾಡಿಕೊಂಡಿರುತ್ತಾರೆ ಎಂದು ನಮೂದಾಗಿರುತ್ತದೆ. |
| 6 | 99 | 17-32 | 1966-67ರಿಂದ 68-69ರ ಆರ್.ಟಿ.ಸಿ ಪ್ರಕಾರ ಸರ್ಕಾರಿ ಕೆರೆ ಅಂಗಳ ವಾಗಿರುತ್ತದೆ. |
| | ಒಟ್ಟು | 41-05 | |

**ಹೊಂಗಸಂದ್ರ ಗ್ರಾಮ**

| ಕ್ರ.ಸಂ | ಸರ್ವೆ ನಂ | ವಿಸ್ತೀರ್ಣ ಎಕರೆ/ಗುಂಟೆ | ವಿವರಗಳು |
|---|---|---|---|
| 1 | 26 | 5-18 | ಪ್ರಸ್ತಾಪಿತ ದೇವಾಲಯಕ್ಕೆ ಸೇರಿದ ಜಮೀನು ಇನಾಂ ರದ್ದಿಯಾಯ್ತಿ ಕಾಯ್ದೆ 1955 ರಂತೆ ಸರ್ಕಾರಕ್ಕೆ ವಿಹಿತ ಗೊಂಡಿರುವುದರಿಂದ ದೇವಾಲಯಕ್ಕೆ ವಾರ್ಷಿಕ ರೂ.7,520-00 ಗಳ ಅಂತಿಮ ತಸ್ತೀಕ್ ನಿಗದಿಯಾಗಿ ಸದರಿ ಕಾಯ್ದೆ ಸೆಕ್ಷನ್ 21ರ ಪ್ರಕಾರ ದಿನಾಂಕ:01-07-1970 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲಾಗಿರುತ್ತದೆ.<br>ಆದರೆ ಪಹಣಿಗಳಂತೆ ರಿ.ಸರ್ವೆ ನಂಬರ್ 26 ರ ಪಹಣಿಯ 9ನೇ ಕಾಲಂ ನಲ್ಲಿ ಶ್ರೀ ಧರ್ಮರಾಯಸ್ವಾಮಿ ದೇವಾಲಯಕ್ಕೆ 1-18 ಎಕರೆ-ಗುಂಟೆ ಇರುತ್ತದೆ. ಉಳಿದ ಪಹಣಿಗಳಲ್ಲಿ ಇಂದಿನಂತೆ ಖಾತೆದಾರರ ಹೆಸರು ಇರುತ್ತದೆ. |
| 2 | 34 | 0-13 | |
| 3 | 35 | 2-24 | |
| 4 | 36 | 1-16 | |
| 5 | 37 | 2-37 | |
| 6 | 58 | 2-26 | |
| 7 | 60 | 2-19 | |
| 8 | 33 | 16-25 | ಹೊಂಗಸಂದ್ರ ಗ್ರಾಮದ ಸರ್ವೆ ನಂ 33 ರಲ್ಲಿನ 16-25 ಎ/ಗು ಜಮೀನಿ ನ ಅಧಿಬೋಗದಾರಿಕೆಯ ಹಕ್ಕಿಗೆ ಸಂಬಂಧಿಸಿ ದಂತೆ ಮಾನ್ಯ ಉಚ್ಚನ್ಯಾಯಾಲಯದಲ್ಲಿ ಡಬ್ಲೂಪಿ 28866/2014 ರಂತೆ ಪ್ರಕರಣವನ್ನು ದಾಖಲಾಗಿರುತ್ತದೆ |
| | ಒಟ್ಟು | 34-18 | |

**ದೂಕನಹಳ್ಳಿ ಗ್ರಾಮ**

| ಕ್ರ.ಸಂ | ಸರ್ವೆ ನಂ | ವಿಸ್ತೀರ್ಣ ಎಕರೆ/ಗುಂಟೆ | ವಿವರಗಳು |
|---|---|---|---|
| 1 | 04 | 21-25 | ಮೈಸೂರು ರಾಜ್ಯ ಪತ್ರ ಸಂಖ್ಯೆ ಆರ್.ಡಿ.ಹೆಚ್.17 ಎಲ್ .ಎ.ಬಿ 60 ದಿನಾಂಕ:29-06-1960 ರ ಆದೇಶದಲ್ಲಿ ವಿವಿಧ ಸರ್ವೆ ನಂಬರ್ ಗಳ ಜಮೀನುಗಳನ್ನು ಹೆಚ್ .ಎ.ಎಲ್.ಬಡಾವಣೆ ಗಾಗಿ ಭೂಸ್ವಾಧೀನ ಪಡಿಸಿಕೊಂಡಿದ್ದು ಅಧಿಸೂಚನೆಯನ್ನು ಹೊರಡಿಸಲಾಗಿರುತ್ತದೆ. |
| 2 | 05 | 22-05 | |
| 3 | 07 | 20-09 | |
| 4 | 08 | 05-38 | |
| 5 | 50 | 17-06 | |
| | ಒಟ್ಟು | 87-03 | |

**ಕೋರಮಂಗಲ**

| ಕ್ರ.ಸಂ | ಸರ್ವೆ ನಂ | ವಿಸ್ತೀರ್ಣ ಎಕರೆ/ಗುಂಟೆ | ವಿವರಗಳು |
|---|---|---|---|
| 1 | 36 | 83-30 | ಸರ್ಕಾರಿ ಕೆರೆ ಅಂಗಳ ವಾಗಿರುವುದು ಕಂದಾಯ ದಾಖಲೆಗಳಿಂದ ತಿಳಿದು ಬಂದಿದೆ. |

| | | |
|---|---|---|
| ಆ) | ನೀಲಸಂದ್ರ ಗ್ರಾಮದ ಸರ್ವೆ ನಂ.79ರಲ್ಲಿನ ಆಸ್ತಿಯು ಶ್ರೀ ಧರ್ಮರಾಯಸ್ವಾಮಿ ದೇವಾಲಯಕ್ಕೆಸೇರಿದೆಯೋ; ಈ ಆಸ್ತಿಯು ಎಷ್ಟು ಎಕರೆ ಪ್ರದೇಶವನ್ನು ಹೊಂದಿದೆ; ಪ್ರಸ್ತುತ ಈ ಆಸ್ತಿಯ ಸ್ಥಿತಿಗತಿಗಳೇನು; (ಸಂಪೂರ್ಣ ವಿವರ ನೀಡುವುದು) | ಪ್ರಸ್ತಾಪಿತ ದೇವಾಲಯಕ್ಕೆ ಸೇರಿದ ನೀಲಸಂದ್ರ ಗ್ರಾಮದಲ್ಲಿ ಸರ್ವೆ ನಂಬರ್ 79ರಲ್ಲಿ 15-12 ಎಕರೆ-ಗುಂಟೆ ಜಮೀನಿದ್ದು, ಸದರಿ ಸರ್ವೆ ನಂಬರ್ ಗ್ರಾಮ ನಕಾಶೆಯಂತೆ ಸರ್ಕಾರಿ ಕೆರೆ ಅಂಗಳವಾಗಿದ್ದು ಸ್ಕೆಲ್ ನಂಬರ್ ಆಗಿರುತ್ತದೆ. ಆಕಾರ್ ಬಂದಿನಂತೆ ಪೂರಾ ವಿಸ್ತೀರ್ಣವನ್ನು "ಬಿ" ಖರಾಬಿನಲ್ಲಿ ದಾಖಲಿಸಲಾಗಿದೆ. ಜಮೀನು ಸ್ಥಿತಿಯಂತೆ ಹಾಲಿ ಅಡವಿ ಸ್ಥಿತಿಯಂತೆ ರಸ್ತೆ 1-10 ಎಕರೆ-ಗುಂಟೆ, ಕಟ್ಟಡಗಳು 3-37 ಎಕರೆ-ಗುಂಟೆ, ಕಾಲುವೆ 10 ಗುಂಟೆ ಹಾಗೂ ಖಾಲಿ ಪ್ರದೇಶ 7-39 ಎಕರೆ-ಗುಂಟೆ ಸೇರಿ ಒಟ್ಟು 13-16 ಎಕರೆ-ಗುಂಟೆ ಇರುತ್ತದೆ. ಸದರಿ ಜಮೀನು ಇನಾಂ ರದ್ದಿಯಾತಿ ಎಂಡಾರ್ಸ್‌ಮೆಂಟ್ ಮುಖಾಂತರ ದಿನಾಂಕ:06.02.1965ರಲ್ಲಿ ಶ್ರೀ ಧರ್ಮರಾಯಸ್ವಾಮಿ ದೇವಾಲಯಕ್ಕೆ ಮಂಜೂರಾಗಿರುತ್ತದೆ. ಆದ್ದರಿಂದ ಸರ್ವೆ ನಂಬರ್ 79ರಲ್ಲಿ 15-12 ಎಕರೆ-ಗುಂಟೆ ಜಮೀನು ದೇವಾಲಯಕ್ಕೆ ಸೇರಿದ ಸ್ವತ್ತಾಗಿರುತ್ತದೆ.<br><br>ನೀಲಸಂದ್ರ ಗ್ರಾಮದ ಸರ್ವೆ ನಂ-79 ಹಾಗೂ ಕೋರಮಂಗಲ ಗ್ರಾಮದ ಸರ್ವೆ-36ರಲ್ಲಿನ ಒತ್ತುವರಿಯನ್ನು ಗುರುತಿಸಲು ಜಂಟಿ ನಕ್ಷೆಯನ್ನು ತಯಾರಿಸಿದ್ದು, ಸದರಿ ಸರ್ವೆ ನಂಬರ್ ಗಳಲ್ಲಿ ಸುಮಾರು 216 ಒತ್ತುವರಿದಾರರು ಅನಧಿಕೃತವಾಗಿ ಮನೆಗಳನ್ನು ನಿರ್ಮಿಸಿದ್ದು, ಒತ್ತುವರಿ ವಿಸ್ತೀರ್ಣ 17914.69 ಚದರ ಮೀಟರ್ ಆಗಿದ್ದು (ಸುಮಾರು 4 ಎಕರೆ 17 ಗುಂಟೆ) ಸದರಿ ಒತ್ತುವರಿ ಪೈಕಿ 14 ಒತ್ತುವರಿದಾರರು ಕೋರಮಂಗಲ ಗ್ರಾಮದ ಸರ್ವೆ ನಂ-36ರಲ್ಲಿಯೂ 190 ಒತ್ತುವರಿದಾರರು ನೀಲಸಂದ್ರ ಗ್ರಾಮದ ಸರ್ವೆ ನಂ-79ರಲ್ಲಿಯೂ, 12 ಒತ್ತುವರಿದಾರರು |

ಭಾಗಶಃ ಎರಡು ಗ್ರಾಮದ ಸರ್ವೆ ನಂಬರ್‌ಗಳಲ್ಲಿ ಒತ್ತುವರಿ ಮಾಡಿ ಅನಧಿಕೃತ ಕಟ್ಟಡಗಳನ್ನು ನಿರ್ಮಿಸಿರುತ್ತಾರೆ.

ಪ್ರಸ್ತಾಪಿತ ಜಮೀನಿನಲ್ಲಿ 216 ಜನ ಅನಧಿಕೃತ ಒತ್ತುವರಿದಾರರು ಇದ್ದು, ದಿನಾಂಕ:12-10-2020 ರಂದು ಹೆಚ್ಚುವರಿ 13 ಜನ ಅನಧಿಕೃತ ಒತ್ತುವರಿದಾರರನ್ನು ಗುರುತಿಸಿ, ಸದರಿಯವರ ವಿರುದ್ಧ ಸಂಬಂಧ ಪಟ್ಟ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆಯನ್ನು ದಿನಾಂಕ:04-11-2020 ರಂದು ದಾಖಲು ಮಾಡಲಾಗಿದೆ.

ಪ್ರಸ್ತಾಪಿತ ದೇವಾಲಯದ ಸರ್ವೆ ನಂಬರ್ 79 ರಲ್ಲಿ ಒ.ಎಸ್. ನಂ-9311/2004ರ ಮೇರೆಗೆ ಮಾನ್ಯ ಸಿಟಿ ಸಿವಿಲ್ ನ್ಯಾಯಾಲಯ, ಬೆಂಗಳೂರು ಇಲ್ಲಿ ಖರಾಬು ಸೇರಿ 0.23 ಗುಂಟೆ ವಿಸ್ತೀರ್ಣ ಬಾಬ್ತು ಪ್ರಕರಣ ದಾಖಲಾಗಿದ್ದು, ಈ ಪೈಕಿ 0-04 ಗುಂಟೆ ವಿಸ್ತೀರ್ಣ ಶ್ರೀ ಸಂಪಂಗಿರಾಮ ಬಿನ್ ಸಂಪಂಗಿ ಹಾಗೂ ಇತರರಿಂದ ಒತ್ತುವರಿಯಾಗಿರುತ್ತದೆ.

ಈ ದೇವಾಲಯಕ್ಕೆ ಸೇರಿದ ನೀಲಸಂದ್ರ ಗ್ರಾಮದ ಸರ್ವೆ ನಂ-79ರಲ್ಲಿ 4 ಎಕರೆ 20 ಗುಂಟೆ ಜಮೀನಿನ ಹಕ್ಕುದಾರಿಕೆಯನ್ನು ಕೋರಿ ಬೆಂಗಳೂರಿನ 8 ನೇ ಅಡಿಷನಲ್ ಸಿಟಿ ಸಿವಿಲ್ ಜಡ್ಜ್ ರವರ ನ್ಯಾಯಾಲಯದಲ್ಲಿ ಶ್ರೀ ಮುನಿಯಪ್ಪ ರವರ ವಾರಸುದಾರರಾದ ಶ್ರೀ ಎಂ.ಮುನಿಸ್ವಾಮಿ ಹಾಗೂ ಇತರರು ದಾಖಲು ಮಾಡಿದ ಮೂಲ ದಾವೆ ಸಂಖ್ಯೆ-6246/1997ಅನ್ನು ಸಿವಿಲ್ ನ್ಯಾಯಾಲಯವು ದಿನಾಂಕ:02-03-2006 ರಂದು ವಜಾಗೊಳಿಸಿದ್ದು, ಸದರಿ ತೀರ್ಪಿನ ವಿರುದ್ಧ ವಾದಿಯವರು ಮಾನ್ಯ ಉಚ್ಚನ್ಯಾಯಾಲಯದಲ್ಲಿ ಆರ್.ಎಫ್.ಎ ಸಂಖ್ಯೆ 1702/2006 ಅನ್ನು ದಾಖಲ್ಮಾಡಿದ್ದು. ಸದರಿ ಪ್ರಕರಣಗಳಲ್ಲಿ ತಾತ್ಕಾಲಿಕ ನಿರ್ಭಂದಾಜ್ಞೆ ಕೋರಿ ಸಲ್ಲಿಸಿದ ಮಧ್ಯಾವದಿ ಅರ್ಜಿಯನ್ನು ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ:26-08-2015 ರಂದು ವಜಾಗೊಳಿಸಿರುತ್ತದೆ. ಮಾನ್ಯ ಉಚ್ಚನ್ಯಾಯಾಲಯದ ದಿನಾಂಕ:26-08-2015ರ ಮಧ್ಯಂತರ ಆದೇಶದ ವಿರುದ್ಧ ವಾದಿಯವರು ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲ್ಮಾಡಿದ ಎಸ್.ಎಲ್.ಪಿ ಸಂಖ್ಯೆ:34901/2015 ಅನ್ನು ಮಾನ್ಯ ಸರ್ವೋಚ್ಚ ನ್ಯಾಯಾಲಯವು ದಿನಾಂಕ:06-07-2017 ರಂದು ವಜಾಗೊಳಿಸಿರುತ್ತದೆ. ಪ್ರಸ್ತುತ ಮಾನ್ಯ ಉಚ್ಚನ್ಯಾಯಾಲಯದಲ್ಲಿ ಆರ್.ಎಫ್.ಎ ಸಂಖ್ಯೆ: 1702/2006 ರ ಪ್ರಕರಣವು ಇತ್ಯರ್ಥಕೆ ಬಾಕಿ ಇರುತ್ತದೆ.

ಸರ್ವೆ ನಂಬರನಲ್ಲಿರುವ ಅನಧಿಕೃತದಾರರನ್ನು ತೆರವುಗೊಳಿಸಲು ಒತ್ತುವರಿ ತೆರವು ಕಾರ್ಯಾಚರಣೆ ಮಾಡಿ ತೆರವುಗೊಳಿಸಲಾಗಿರುವ 9-00 ಎಕರೆ ಜಮೀನಿಗೆ ಕಾಂಪೌಂಡ್ ನಿರ್ಮಿಸಲು 80.00ಲಕ್ಷಗಳ ಅಂದಾಜುಪಟ್ಟಿ ಮತ್ತು ನಕ್ಷೆಗೆ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಿ, ಕಾಮಗಾರಿಯನ್ನು ಕೆ.ಆರ್.ಐ.ಡಿ.ಎಲ್.ರವರಿಗೆ ವಹಿಸಲಾಗಿರುತ್ತದೆ. ಸದರಿ ಕಾಮಗಾರಿಯ 1/3 ಭಾಗದ ಮೊದಲನೇ ಕಂತಿನ ಬಾಬು ರೂ.26.00 ಲಕ್ಷಗಳನ್ನು ಜಿಲ್ಲಾಧಿಕಾರಿಗಳು ಬೆಂಗಳೂರು ನಗರ ಜಿಲ್ಲೆ ರವರು ದಿನಾಂಕ:15.04.2017 ರಂದು ಬಿಡುಗಡೆ ಮಾಡಿರುತ್ತಾರೆ.

ಸದರಿ ಕಾಮಗಾರಿಯನ್ನು ಕೈಗೊಳ್ಳುವ ಕುರಿತು ಮಾನ್ಯ ಜಿಲ್ಲಾಧಿಕಾರಿಗಳ ಕಛೇರಿಯಿಂದ ಹೊರಡಿಸಲಾಗಿರುವ ಅಧಿಕೃತ ಜ್ಞಾಪನಾ ಪತ್ರ ಸಂಖ್ಯೆ ಡಿವಿಎಸ್ (ಎ) ಸಿಆರ್ 10/1989-90 ದಿನಾಂಕ:12-11-2020ರ ಆದೇಶವನ್ನು ಪ್ರಶ್ನಿಸಿ ಶ್ರೀ ತಾಯಪ್ಪ ರವರು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಪ್ರಕರಣ ಸಂ:ಡಬ್ಲ್ಯೂಪಿ 13506/2021ಅನ್ನು ದಾಖಲು ಮಾಡಿದ್ದು, ಮಾನ್ಯ ಉಚ್ಚ ನ್ಯಾಯಾಲಯವು ಯಥಾ ಸ್ಥಿತಿಯನ್ನು ಕಾಪಾಡಲು ಆದೇಶವನ್ನು ಹೊರಡಿಸಿದ್ದು, ಯಥಾ ಸ್ಥಿತಿಯನ್ನು ತೆರವುಗೊಳಿಸುವ ಕುರಿತು ಸರ್ಕಾರಿ ವಕೀಲರ ಮುಖಾಂತರ ಸ್ಪೇಷಲ್ ಮೆಮೋ ಮಾನ್ಯ ಉಚ್ಚ ನ್ಯಾಯಾಲಯಕ್ಕೆ ಸಲ್ಲಿಸಲಾಗಿದೆ.

ಪ್ರಸ್ತಾಪಿತ ಸ್ಥಳವನ್ನು ಮೋಜಣಿದಾರರು ಸರ್ವೆ ಮಾಡಿ ತಯಾರಿಸಿರುವ ನಕ್ಷೆಯಲ್ಲಿ ತೋರಿಸಿರುವಂತೆ ಕಾಂಪೌಂಡ್ ಗೋಡೆ ನಿರ್ಮಾಣ ಮಾಡಬೇಕಾಗಿರುವ ಸ್ಥಳವನ್ನು " ಭೂಮಿ ಹಸ್ತಾಂತರ ಪತ್ರ' ದ ಮೂಲಕ ಕಾರ್ಯಪಾಲಕ ಅಭಿಯಂತರರು, ಕೆ.ಆರ್.ಐ.ಡಿ.ಎಲ್. ಸಂಸ್ಥೆ ಇವರಿಗೆ ಜಮೀನನ್ನು ಹಸ್ತಾಂತರಿಸಲಾಗಿದೆ.

ಇನ್ನುಳಿದ 6-12 ಎ-ಗು ಪ್ರದೇಶದಲ್ಲಿ ಸುಮಾರು 216 ಮಂದಿ ಅನಧಿಕೃತವಾಗಿ ಮನೆಗಳನ್ನು ನಿರ್ಮಿಸಿದ್ದು, (13 ಹೊಸ ಒತ್ತುವರಿದಾರರ ಒತ್ತುವರಿ ವಿಸ್ತೀರ್ಣದ ಅಳತೆ ಬಾಕಿ ಇದ್ದು) ಸದರಿ ಮನೆಗಳನ್ನು ತೆರವುಗೊಳಿಸುವ ಕುರಿತು ಕರ್ನಾಟಕ ಭೂ ಕಬಳಿಕೆ ನಿಷೇಧ ಕಾಯ್ದೆ ವಿಶೇಷ ನ್ಯಾಯಾಲಯದಲ್ಲಿ ಪ್ರಕರಣ ದಾಖಲಿಸಲು ದಿನಾಂಕ:23.09.2019ರಂದು

| | | |
|---|---|---|
| | | ಶ್ರೀ ಹರಿಶ್ಚಂದ್ರ, ಖಾಸಗಿ ವಕೀಲರು ಇವರನ್ನು ನೇಮಕಾತಿ ಮಾಡಲಾಗಿರುತ್ತದೆ.<br><br>ಒಟ್ಟು 229 ಅನಧಿಕೃತದ್ದಾರರ ಪೈಕಿ ಮೊದಲಿಗೆ 5 ಜನ ಅನಧಿಕೃತದಾರರ ವಿರುದ್ಧ ಕರ್ನಾಟಕ ಭೂ-ಕಬಳಿಕ ನಿಷೇಧ ನ್ಯಾಯಾಲಯದಲ್ಲಿ ಪ್ರಕರಣಗಳನ್ನು ದಾಖಲಿಸಿದ್ದು, ಉಳಿದ ಒತ್ತುವರಿದಾರರ ವಿರುದ್ಧ ಪ್ರಕರಣ ದಾಖಲಿಸಲು ಕ್ರಮ ವಹಿಸಲಾಗುತ್ತಿರುತ್ತದೆ. ಈಗಾಗಲೇ ದಾಖಲಾಗಿರುವ ಪ್ರಕರಣಗಳ ವಿಚಾರಣೆಯು ದಿನಾಂಕ:26-07-2021 ರಂದು ನಡೆದಿದ್ದು ಮುಂದಿನ ವಿಚಾರಣೆಯ ದಿನಾಂಕ ನಿಗದಿಯಾಗಿರುವುದಿಲ್ಲ.<br><br>ದಿನಾಂಕ:18.11.2019ರಂದು ಕೆ.ಆರ್.ಐ.ಡಿ.ಎಲ್. ಸಿಬ್ಬಂದಿಗಳು ಮತ್ತು ಕಾರ್ಯ ನಿರ್ವಾಹಕ ಅಧಿಕಾರಿಗಳು ಸಿಬ್ಬಂದಿಗಳೊಂದಿಗೆ ಕಾಂಪೌಂಡ್ ಕಾಮಗಾರಿಯನ್ನು ಪ್ರಾರಂಭಿಸಲು ಸ್ಥಳಕ್ಕೆ ಭೇಟಿ ನೀಡಿದಾಗ ನೀಲಸಂದ್ರ ಗ್ರಾಮದ ಸ್ಥಳೀಯರು ಕಾಮಗಾರಿಯನ್ನು ಪ್ರಾರಂಭಿಸಲು ಅವಕಾಶ ನೀಡದೆ ಗುಂಪುಗೂಡಿ ಪ್ರತಿಭಟನೆ ಮಾಡಿದ್ದರಿಂದ ಕಾಮಗಾರಿಯನ್ನು ಪ್ರಾರಂಭಿಸಲು ಸಾಧ್ಯವಾಗಿರುವುದಿಲ್ಲ. ಪೊಲೀಸ್ ಬಂದೋಬಸ್ತ್ ಪಡೆದು ಕಾಮಗಾರಿ ಪ್ರಾರಂಭಿಸಬೇಕಾಗಿರುತ್ತದೆ. ದಿನಾಂಕ: 22.01.2020ರಂದು ಕಾರ್ಯಪಾಲಕ ಅಭಿಯಂತರರೊಂದಿಗೆ ಹಾಗೂ ಕಛೇರಿಯ ಸಿಬ್ಬಂದಿಯವರೊಂದಿಗೆ ಸ್ಥಳಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಅನಧಿಕೃತವಾಗಿ ಸುಮಾರು ಮನೆಗಳು ನಿರ್ಮಿಸುತ್ತಿರುವುದು ಕಂಡುಬಂದಿದ್ದು, ಸದರಿ ಜಮೀನಿನಲ್ಲಿ ಅನಧಿಕೃತವಾಗಿ ನಿರ್ಮಿಸಿರುವ ಮನೆಗಳನ್ನು ಕೂಡಲೇ ಸ್ಥಗಿತಗೊಳಿಸಲು ಕ್ರಮ ಕೈಗೊಳ್ಳಲು ಪೊಲೀಸ್ ಇನ್ಸ್ ಪೆಕ್ಟರ್ ಅಶೋಕ್ ನಗರ ಪೊಲೀಸ್ ಠಾಣೆ, ಅಶೋಕ್ ನಗರ, ಬೆಂಗಳೂರು ಇವರಿಗೆ ಕೋರಲಾಗಿರುತ್ತದೆ.<br><br>ಸರ್ಕಾರಿ ಜಮೀನುಗಳ ಸಂರಕ್ಷಣಾ ಸಮಿತಿಯ ನಿರ್ದೇಶನದಂತೆ 2020 ನೇ ಸಾಲಿನ ಡಿಸೆಂಬರ್ ಮಾಹೆಯಿಂದ ಒಂದು ಪಾಳಿಯಲ್ಲಿ ಇಬ್ಬರು ಭದ್ರತಾ ಸಿಬ್ಬಂದಿ ಹಾಗೂ ಒಬ್ಬ ಗನ್ ಮ್ಯಾನ್ ಸೇರಿದಂತೆ ಮೂರು ಪಾಳಿಗಳಲ್ಲಿ ಜಮೀನನ್ನು ಸಂರಕ್ಷಿಸುವ ನಿಟ್ಟಿನಲ್ಲಿ ಕರ್ತವ್ಯ ನಿರ್ವಹಿಸಲು ಭದ್ರತಾ ಸಿಬ್ಬಂದಿಗಳನ್ನು ನಿಯೋಜಿಸಲಾಗಿದ್ದು, ಪ್ರಸ್ತುತ ಪ್ರಸ್ತಾಪಿತ ಜಮೀನಿನಲ್ಲಿ ಯಾವುದೇ ಅನಧಿಕೃತ ಕಟ್ಟಡಗಳು ನಿರ್ಮಾಣವಾಗಿರುವುದಿಲ್ಲ.<br><br>ಈ ದೇವಾಲಯದ ಆಸ್ತಿಗಳ ಸಂರಕ್ಷಣೆ ಕುರಿತು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಕಂದಾಯ ಇಲಾಖೆ(ಮುಜರಾಯಿ) ರವರ ಅಧ್ಯಕ್ಷತೆಯಲ್ಲಿ ದಿನಾಂಕ:05-01-2022 ರಂದು ಸಭೆ ನಡೆದಿರುತ್ತದೆ.<br><br>ಸದರಿ ಸಭೆಯಲ್ಲಿ ಈ ಹಿಂದೆ ಪ್ರಸ್ತಾಪಿತ ದೇವಾಲಯದಲ್ಲಿ ಕಾರ್ಯ ನಿರ್ವಾಹಕ ಅಧಿಕಾರಿಗಳು ಕರ್ತವ್ಯ ನಿರ್ವಹಿಸಿದ ಅವಧಿಗಳಲ್ಲಿ ಒತ್ತುವರಿ ತೆರವಿಗೆ ಸಂಬಂಧಿಸಿದಂತೆ, ಪ್ರಶ್ನಿತ ಜಮೀನಿಗೆ ವಿವಿಧ ನ್ಯಾಯಾಲಯಗಳಲ್ಲಿ ಹೊರಡಿಸಿರುವ ಆದೇಶಗಳನ್ವಯ ಒತ್ತುವರಿ ತೆರವುಗೊಳಿಸಲು ಹಾಗೂ ಸಂರಕ್ಷಿಸಲು ಯಾವುದೇ ಕ್ರಮ ಕೈಗೊಳ್ಳದೆ ಇರುವುದು, ಇದರಿಂದ ಒತ್ತುವರಿಗೆ ಸಹಕಾರ ಮಾಡಿರುವುದು/ ನ್ಯಾಯಾಲಯದ ಪ್ರಕರಣಗಳಲ್ಲಿ ಕ್ಲಪ್ತ ಸಮಯಕ್ಕೆ ಪ್ರಕರಣ ವಿಲೇ ಮಾಡಲು ಕ್ರಮ ಕೈಗೊಳ್ಳದೆ ಇರುವುದು ಮೇಲ್ನೋಟಕ್ಕೆ ಕಂಡು ಬಂದಿದೆ ಎಂದು ಈ ಹಿನ್ನಲೆಯಲ್ಲಿ ಮೇಲ್ಕಂಡ ಅಧಿಕಾರಿಗಳ ವಿರುದ್ಧ ಇಲಾಖೆಯು ಕೂಡಲೇ ನಿಯಮಾನುಸಾರ ಕಾನೂನು ಕ್ರಮವನ್ನು ಕೈಗೊಳ್ಳುವಂತೆ ಪ್ರಧಾನ ಕಾರ್ಯದರ್ಶಿಗಳು, ಸೂಚನೆ ನೀಡಿತ್ತಾರೆ. ಅದರಂತೆ ನಿಯಮಾನುಸಾರ ಕ್ರಮವಹಿಸಿದೆ.<br><br>ಸದರಿ ಸಭೆಯ ನಡವಳಿಯಲ್ಲಿ ನೀಡಿರುವ ಸೂಚನೆ/ನಿರ್ದೇಶನದಂತೆ ಜರೂರಾಗಿ ಕ್ರಮ ಕೈಗೊಂಡು ಕೈಗೊಂಡ ಕ್ರಮದ ಬಗ್ಗೆ ಪಾಲನಾ ವರದಿಯನ್ನು ಸಲ್ಲಿಸಲು ಕೋರಿ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ರವರಿಗೆ ದಿನಾಂಕ:27-01-2022 ರಂದು ಪತ್ರ ಬರೆಯಲಾಗಿದೆ. |
| ಇ) | ಬೆಂಗಳೂರು ನಗರ ಮುಜರಾಯಿ ಇಲಾಖೆಯ ಡಿಯಲ್ಲಿ ಬರುವ ಶ್ರೀ ಧರ್ಮರಾಯಸ್ವಾಮಿ ದೇವಸ್ಥಾನಕ್ಕೆ ಸೇರಿದ ನೀಲಸಂದ್ರ ಗ್ರಾಮದ ಸರ್ವೆ ನಂ.79ರ ಜಮೀನಿನಲ್ಲಿ ಒಟ್ಟು ವಿಸ್ತೀರ್ಣ 15 ಎಕರೆ | ಬೆಂಗಳೂರು ಉತ್ತರ ತಾಲೂಕು, ನೀಲಸಂದ್ರ ಗ್ರಾಮದ ಸರ್ವೆ ನಂ.79 ರಲ್ಲಿನ 15-12 ಎಕರೆ-ಗುಂಟೆ ಇನಾಂ ಜಮೀನು ಶ್ರೀ ಧರ್ಮರಾಯಸ್ವಾಮಿ ದೇವಾಲಯಕ್ಕೆ ಸೇರಿದ್ದು, ದಿನಾಂಕ:07/12/1992 ರಂದು ಮುಜರಾಯಿ ಇಲಾಖೆಯ ಸ್ವಾಧೀನಕ್ಕೆ ಪಡೆಯಲಾಗಿದ್ದು, ಸದರಿ ಜಮೀನನ್ನು ಮುಜರಾಯಿ ಇಲಾಖೆಯ ವಶಕ್ಕೆ ಪಡೆಯುವ ಪೂರ್ವದಲ್ಲೇ ಸಾಕಷ್ಟು ಒತ್ತುವರಿಯಾಗಿರುತ್ತದೆ.<br>ಈ ಜಮೀನು ಸರ್ವೆ ನಂಬರ್ ಗ್ರಾಮ ನಕಾಶೆಯಂತೆ ಸರ್ಕಾರಿ ಕೆರೆ ಅಂಗಳವಾಗಿದ್ದು ಸ್ಕೆಲ್ ನಂಬರ್ ಆಗಿರುತ್ತದೆ. ಆಕಾರ್ ಬಂದಿನಂತೆ ಪೂರಾ ವಿಸ್ತೀರ್ಣವನ್ನು "ಬಿ" ಖರಾಬಿನಲ್ಲಿ ದಾಖಲಿಸಲಾಗಿದೆ. ಜಮೀನು ಸ್ಥಿತಿಯಂತೆ ಹಾಲಿ ಅಡವಿ ಸ್ಥಿತಿಯಂತೆ ರಸ್ತೆ 1-10 ಎಕರೆ-ಗುಂಟೆ, |

| | | |
|---|---|---|
| | 12 ಗುಂಟೆ ಜಾಗದ ವಿಷಯವಾಗಿ ನ್ಯಾಯಾಲಯದ ಆದೇಶಗಳು ಮುಜರಾಯಿ ಇಲಾಖೆಯ ಪರವಾಗಿ ಆದ ನಂತರ ಸರ್ಕಾರಿ ಆದೇಶದ ಪ್ರಕಾರ 1992ರಲ್ಲಿ ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು/ ಮುಜರಾಯಿ ಇಲಾಖೆಯವರು ಸ್ವಾಧೀನ ಪಡೆದಿರುತ್ತಾರೆಯೇ;<br>ಪಡೆದಿದ್ದಲ್ಲಿ, ಯಾವ ದಿನಾಂಕದಿಂದ ವಶಕ್ಕೆ ಪಡೆಯಲಾಗಿದೆ; ಹಾಗೂ ಈ ದಿನದಿಂದ ಇಲ್ಲಿಯವರೆಗೂ ಯಥಾಸ್ಥಿತಿ ಸ್ವತ್ತನ್ನು ಸಂರಕ್ಷಿಸಲಾಗಿದೆಯೇ; ಈ ಕುರಿತು ಸರ್ಕಾರ ಕೈಗೊಂಡ ಕ್ರಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ಕಟ್ಟಡಗಳು 3-37 ಎಕರೆ-ಗುಂಟೆ, ಕಾಲುವೆ 10 ಗುಂಟೆ ಹಾಗೂ ಖಾಲಿ ಪ್ರದೇಶ 7-39 ಎಕರೆ-ಗುಂಟೆ ಸೇರಿ ಒಟ್ಟು 13-16 ಎಕರೆ-ಗುಂಟೆ ಇರುತ್ತದೆ. ಸದರಿ ಜಮೀನು ಇನಾಂ ರದ್ದಿಯಾತಿ ಎಂಡಾರ್ಸ್‌ಮೆಂಟ್ ಮುಖಾಂತರ ದಿನಾಂಕ:06.02.1965ರಲ್ಲಿ ಶ್ರೀ ಧರ್ಮರಾಯಸ್ವಾಮಿಗೆ ಮಂಜೂರಾಗಿರುತ್ತದೆ. ಆದ್ದರಿಂದ ಸರ್ವೆ ನಂಬರ್ 79ರಲ್ಲಿ 15-12 ಎಕರೆ-ಗುಂಟೆ ಜಮೀನು ದೇವಾಲಯಕ್ಕೆ ಸೇರಿದ ಸ್ವತ್ತಾಗಿರುತ್ತದೆ.<br><br>ನೀಲಸಂದ್ರ ಗ್ರಾಮದ ಸರ್ವೆ ನಂ-79 ಹಾಗೂ ಕೋರಮಂಗಲ ಗ್ರಾಮದ ಸರ್ವೆ-36ರಲ್ಲಿನ ಒತ್ತುವರಿಯನ್ನು ಗುರುತಿಸಲು ಜಂಟಿ ನಕ್ಷೆಯನ್ನು ತಯಾರಿಸಿದ್ದು, ಸದರಿ ಸರ್ವೆ ನಂಬರ್‌ಗಳಲ್ಲಿ ಸುಮಾರು 216 ಒತ್ತುವರಿದಾರರು ಅನಧಿಕೃತವಾಗಿ ಮನೆಗಳನ್ನು ನಿರ್ಮಿಸಿರುತ್ತಾರೆ. ಒತ್ತುವರಿ ವಿಸ್ತೀರ್ಣ 17914.69 ಚದರ ಮೀಟರ್ ಆಗಿದ್ದು (ಸುಮಾರು 4 ಎಕರೆ 17 ಗುಂಟೆ) ಸದರಿ ಒತ್ತುವರಿ ಪೈಕಿ 14 ಒತ್ತುವರಿದಾರರು ಕೋರಮಂಗಲ ಗ್ರಾಮದ ಸರ್ವೆ ನಂ-36ರಲ್ಲಿಯೂ 190 ಒತ್ತುವರಿದಾರರು ನೀಲಸಂದ್ರ ಗ್ರಾಮದ ಸರ್ವೆ ನಂಬರ್ 79ರಲ್ಲಿಯೂ, 12 ಒತ್ತುವರಿದಾರರು ಭಾಗಶಃ ಎರಡು ಗ್ರಾಮದ ಸರ್ವೆ ನಂಬರ್‌ಗಳಲ್ಲಿ ಒತ್ತುವರಿ ಮಾಡಿ ಅನಧಿಕೃತ ಕಟ್ಟಡಗಳನ್ನು ನಿರ್ಮಿಸಿರುತ್ತಾರೆ.<br><br>ಸರ್ವೆ ನಂಬರ್ 79ರಲ್ಲಿ ಒ.ಎಸ್. ನಂ-9311/2004ರ ಮೇರೆಗೆ ಮಾನ್ಯ ಸಿಟಿ ಸಿವಿಲ್ ನ್ಯಾಯಾಲಯ, ಬೆಂಗಳೂರು ಇಲ್ಲಿ ಖರಾಬು ಸೇರಿ 0.23 ಗುಂಟೆ ವಿಸ್ತೀರ್ಣ ಬಾಬ್ತು ಪ್ರಕರಣ ದಾಖಲಾಗಿದ್ದು, ಈ ಪೈಕಿ 0-04 ಗುಂಟೆ ವಿಸ್ತೀರ್ಣ ಶ್ರೀ ಸಂಪಂಗಿರಾಮ ಬಿನ್ ಸಂಪಂಗಿ ಹಾಗೂ ಇತರರಿಂದ ಒತ್ತುವರಿಯಾಗಿರುತ್ತದೆ<br><br>ಜಿಲ್ಲಾಡಳಿತ ವತಿಯಿಂದ ದಿನಾಂಕ:07-02-2015ರಿಂದ ದಿನಾಂಕ: 10-02-2015 ರವರೆಗೆ ಒತ್ತವರಿ ತೆರವು ಕಾರ್ಯಚರಣೆಯನ್ನು ಕೈಗೊಂಡು 15-12 ಎಕರೆ/ಗುಂಟೆ ಜಮೀನಿನ ಪೈಕಿ ಒತ್ತವರಿಯಾಗಿದ್ದ ಸುಮಾರು 9-00 ಎಕರೆ ಜಮೀನಿನಲ್ಲಿ ನಿರ್ಮಿಸಲಾಗಿದ್ದ ವಾಣಿಜ್ಯ ಮಳಿಗೆಗಳನ್ನು ತೆರವುಗೊಳಿಸಲಾದ ಖಾಲಿ ಪ್ರದೇಶಕ್ಕೆ ಬೆಂಗಳೂರು ನಗರ ಜಿಲ್ಲೆ ನಿರ್ಮಿತಿ ಕೇಂದ್ರದವರ ಮೂಲಕ ತಂತಿ ಬೇಲಿಯನ್ನು ಹಾಕಿಸಲಾಗಿದ್ದು, ಈ ಮಧ್ಯೆ ಕೆಲವರು ತಂತಿ ಬೇಲಿಯನ್ನು ಕೆಲವು ಕಡೆ ಕೆಡವಿ ಹಾಕಿರುತ್ತಾರೆ<br><br>ಸರ್ವೆ ನಂಬರನಲ್ಲಿರುವ ಅನಧಿಕೃತದಾರರನ್ನು ತೆರವುಗೊಳಿಸಲು ಒತ್ತುವರಿ ತೆರವು ಕಾರ್ಯಾಚರಣೆ ಮಾಡಿ ತೆರವುಗೊಳಿಸಲಾಗಿರುವ 9-00 ಎಕರೆ ಜಮೀನಿಗೆ ಕಾಂಪೌಂಡ್ ನಿರ್ಮಿಸಲು ಅಂದಾಜುಪಟ್ಟಿ ಮತ್ತು ನಕ್ಷೆಗೆ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಿ, ಕಾಮಗಾರಿಯನ್ನು ಕೆ.ಆರ್.ಐ.ಡಿ.ಎಲ್.ರವರಿಗೆ ವಹಿಸಲಾಗಿರುತ್ತದೆ. ಸದರಿ ಕಾಮಗಾರಿಯ 1/3 ಭಾಗದ ಮೊದಲನೇ ಕಂತಿನ ಬಾಬು ರೂ.26.00ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.<br><br>ಈ ಸ್ಥಳವನ್ನು ಮೋಜಣಿದಾರರು ಸರ್ವೆ ಮಾಡಿ ತಯಾರಿಸಿರುವ ನಕ್ಷೆಯಲ್ಲಿ ತೋರಿಸಿರುವಂತೆ ಕಾಂಪೌಂಡ್ ಗೋಡೆ ನಿರ್ಮಾಣ ಮಾಡಬೇಕಾಗಿರುವ ಸ್ಥಳವನ್ನು " ಭೂಮಿ ಹಸ್ತಾಂತರ ಪತ್ರ' ದ ಮೂಲಕ ಕಾರ್ಯಪಾಲಕ ಅಭಿಯಂತರರು, ಕೆ.ಆರ್.ಐ.ಡಿ.ಎಲ್. ಸಂಸ್ಥೆ ಇವರಿಗೆ ಜಮೀನನ್ನು ಹಸ್ತಾಂತರಿಸಲಾಗಿದೆ.<br><br>ಪ್ರಸ್ತಾಪಿತ ಆಸ್ತಿಯನ್ನು ಸಂರಕ್ಷಿಸುವ ಸಲುವಾಗಿ ಕಾಂಪೌಂಡ್ ಗೋಡೆಯನ್ನು ನಿರ್ಮಿಸುವ ಸಲುವಾಗಿ ಪೊಲೀಸ್ ಸಹಕಾರದೊಂದಿಗೆ ಇಲಾಖಾ ಅಧಿಕಾರಿಗಳು ಹಾಗೂ ಸಿಬ್ಬಂದಿಗಳೊಂದಿಗೆ ಹಾಜರಾಗಿದ್ದು, ಈ ಸಂದರ್ಭದಲ್ಲಿ ಪ್ರಸ್ತಾಪಿತ ಜಮೀನನ್ನು ಅಳತೆ ಮಾಡಿ ಹದ್ದುಬಸ್ತನ್ನು ನಿಗದಿ ಪಡಿಸಿ ಬಣ್ಣದಿಂದ ಗುರುತು ಮಾಡಲಾಗಿದೆ.<br><br>ಬಿ.ಬಿ.ಎಂ.ಪಿ.ಯ ಸಹಾಯಕ ಕಂದಾಯ ಅಧಿಕಾರಿ, (ಶಾಂತಿನಗರ) ಉಪವಿಭಾಗ, ಬೆಂಗಳೂರು ರವರು ದೇವಾಲಯದ ಕಾರ್ಯನಿರ್ವಾಹಕ ಅಧಿಕಾರಿಯವರಿಗೆ ದಿನಾಂಕ: 03.02.2021ರಲ್ಲಿ ಪತ್ರ ಬರೆದು ತಿಗಳರಪೇಟೆಯಲ್ಲಿರುವ ಶ್ರೀ ಧರ್ಮರಾಯಸ್ವಾಮಿ ದೇವಾಲಯಕ್ಕೆ ಸೇರಿದ ನೀಲಸಂದ್ರ ಗ್ರಾಮದ ಸರ್ವೆ ನಂ 79ರಲ್ಲಿನ 15-12 ಎಕರೆ/ಗುಂಟೆ ಜಮೀನಿಗೆ ಸಂಬಂಧಿಸಿದಂತೆ ಪಾಲಿಕೆ ವತಿಯಿಂದ ಪ್ರಶ್ನಿತ ಸ್ವತ್ತಿಗೆ ಮುಂದೆ ಯಾವುದೇ ಖಾತೆ ಮಾಡುವುದಿಲ್ಲವೆಂದು ತಿಳಿಸಿರುತ್ತಾರೆ.<br>ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ರವರು ದಿನಾಂಕ:19.04.2021 ರಂದು |

<table>
<tr><td></td><td></td><td>ಸಹಾಯಕ ನಿರ್ವಾಹಕ ಅಭಿಯಂತರರು ಬೆಸ್ಕಾಂ, ಆಸ್ಟಿನ್ ಟೌನ್ ರವರಿಗೆ ಪತ್ರ ಬರೆದು ಪ್ರಸ್ತಾಪಿತ ಸರ್ವೆ ನಂಬರ್ ನಲ್ಲಿ ಅನಧಿಕೃತವಾಗಿ ನಿರ್ಮಾಣ ಮಾಡಿರುವ ಮನೆ ಮತ್ತು ಮಳಿಗೆಗಳಿಗೆ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆ, ಸಂಪರ್ಕ ನೀಡಿರುವ ಮಾಹಿತಿಗಳನ್ನು ನೀಡಲು ಹಾಗೂ ಇನ್ನು ಮುಂದೆ ಇಲಾಖಾ ಅನುಮತಿ ಪಡೆಯದೇ ಯಾವುದೇ ಮನೆ ಮತ್ತು ಮಳಿಗೆಗಳಿಗೆ ನೀರು ಸರಬರಾಜು ಮತ್ತು ಒಳಚರಂಡಿಯ ವ್ಯವಸ್ಥೆಯ ಸಂಪರ್ಕ ನೀಡದಂತೆ ತಿಳಿಸಿರುತ್ತಾರೆ.<br><br>ಅನಧಿಕೃತದಾರರ ವಿರುದ್ಧ ಪಿಪಿಎ ಪ್ರಕರಣ ದಾಖಲಿಸಲು ಕ್ರಮವಹಿಸುವಂತೆ ಸಹಾಯಕ ಆಯುಕ್ತರು ಮುಜರಾಯಿ ಕಾಮಗಾರಿಗಳು ನಗರ ಸಭಾವಲಯ ಬೆಂಗಳೂರು ಇವರಿಗೆ ದಿನಾಂಕ:08-12-2021 ರಂದು ಪತ್ರ ಬರೆಯಲಾಗಿ ಅದರಂತೆ 50 ಮಂದಿ ಅನಧಿಕೃತ ಒತ್ತುವರಿದಾರರಿಗೆ ನೋಟೀಸ್ ಅನ್ನು ಆರ್ ಪಿಐಡಿ ಮೂಲಕ ನೀಡಲಾಗಿದೆ.</td></tr>
<tr><td>ಈ)</td><td>ಸ್ವತ್ತನ್ನು ರಕ್ಷಿಸುವ ಸಲುವಾಗಿ ಮುಜರಾಯಿ ಇಲಾಖೆಯಿಂದ ನೇಮಿಸ ಲಾಗಿದೆಯೇ; ನೇಮಿಸಿದ್ದಲ್ಲಿ, ಯಾವ ವರ್ಷದಿಂದ ಕಾವಲುಗಾರರನ್ನು ನೇಮಿಸ ಲಾಗಿದೆ; ಮತ್ತು ಸದರಿ ಕಾವಲುಗಾರರಿಗೆ ವೆಚ್ಚ ಮಾಡಿದ ಒಟ್ಟು ಮೊತ್ತವೆಷ್ಟು; (ವಿವರ ನೀಡುವುದು)</td><td>ಬೆಂಗಳೂರು ನಗರ ತಿಗಳರಪೇಟೆಯಲ್ಲಿರುವ ಶ್ರೀ ಧರ್ಮರಾಯಸ್ವಾಮಿ ದೇವಾಲಯಕ್ಕೆ ಸೇರಿದ ನೀಲಸಂದ್ರ ಗ್ರಾಮದಲ್ಲಿರುವ ಸರ್ವೆ ನಂ.79 ರಲ್ಲಿ 15-12 ಎಕರೆ/ಗುಂಟೆ ಜಮೀನನ್ನು ಸಂರಕ್ಷಿಸುವ ಸಲುವಾಗಿ ದಿನಾಂಕ:13-11-2020 ರಿಂದ 2021 ನೇ ಸಾಲಿನವರೆಗೂ ಒಂದು ಪಾಳಿಗೆ 03 ಭದ್ರತಾ ಸಿಬ್ಬಂದಿ ಹಾಗೂ 01 ಗನ್ ಮ್ಯಾನ್ ನ್ನು ಒಟ್ಟು 03 ಪಾಳಿಗೆ 09 ಭದ್ರತಾ ಸಿಬ್ಬಂದಿ ಹಾಗೂ 03 ಜನ ಗನ್ ಮ್ಯಾನ್ ನ್ನು ನಿಯೋಜಿಸಲಾಗಿರುತ್ತದೆಂದು ದಿನಾಂಕ:13-11-2020 ರಿಂದ ದಿನಾಂಕ:14-12-2021 ರವರೆಗೆ ಕಾವಲುಗಾರರಿಗೆ ಮಾಡಲಾದ ವೆಚ್ಚದ ವಿವರ ಈ ಕೆಳಕಂಡಂತೆ ಇದೆ.<br><br>ವೆಚ್ಚದ ವಿವರಗಳು
<table>
<tr><th>ಕ್ರ. ಸಂ</th><th>ವಿವರಗಳು</th><th>ಮೊತ್ತ (ರೂಗಳಲ್ಲಿ)</th></tr>
<tr><td>1</td><td>ಸಾಮಾನ್ಯಸಂಗ್ರಹಣ ನಿಧಿಯಿಂದ</td><td>14,76,544=00</td></tr>
<tr><td>2</td><td>ದೇವಾಲಯದ ನಿಶ್ಚಿತ ಠೇವಣಿಯಿಂದ</td><td>15,83,180=00</td></tr>
<tr><td>3</td><td>ದೇವಾಲಯದ ಉಳಿತಾಯ ನಿಧಿಯಿಂದ</td><td>1,43,959=00</td></tr>
<tr><td></td><td>ಕಾವಲುಗಾರರಿಗೆ ತಗುಲಿದ ಒಟ್ಟು ವೆಚ್ಚದ ಮೊತ್ತ</td><td>32,03,683=00</td></tr>
</table></td></tr>
<tr><td>ಉ)</td><td>ಸದರಿ ಸ್ವತ್ತನ್ನು ಸ್ವಾಧೀನ ಪಡೆಯುವ ದಿನದಂದು ಈ ಜಮೀನಿನಲ್ಲಿ ಒಟ್ಟು ಸಂಖ್ಯೆಯ ಮನೆಗಳು/ ಕಟ್ಟಡಗಳು ಅಕ್ರಮವಾಗಿ ನಿರ್ಮಾಣವಾಗಿದ್ದವು ಮತ್ತು ಪ್ರಸ್ತುತ ಇರುವ ಅಕ್ರಮ ಕಟ್ಟಡಗಳು/ಮನೆಗಳ ಒಟ್ಟು ಸಂಖ್ಯೆಗಳು ಎಷ್ಟು; (ವಿವರ ನೀಡುವುದು)</td><td>ದಿನಾಂಕ:07-12-1992 ರಂದು ಈ ದೇವಾಲಯಕ್ಕೆ ಸೇರಿದ ಸರ್ವೆ ನಂ.79 ರ 15-12 ಎಕರೆ ಜಮೀನನ್ನು ಇಲಾಖಾ ವಶಕ್ಕೆ ಪಡೆಯಲಾಗಿರುತ್ತದೆ.<br><br>1-20 ಎಕರೆ-ಗುಂಟೆ ಪ್ರದೇಶದಲ್ಲಿ ಜಮೀನಿನ ಸ್ಥಿತಿ ಪ್ರಕಾರ ಮನೆಗಳನ್ನು ಕಟ್ಟಿರುತ್ತಾರೆ. ಎಷ್ಟು ಮನೆಗಳು/ಕಟ್ಟಡಗಳು ಅಕ್ರಮವಾಗಿ ನಿರ್ಮಾಣವಾಗಿರುತ್ತದೆ ಎಂಬ ಬಗ್ಗೆ ನಿಖರವಾದ ಅಂಕಿ ಅಂಶಗಳನ್ನು ಪಡೆಯಲು ಕ್ರಮ ವಹಿಸಲಾಗುತ್ತಿದೆ.</td></tr>
<tr><td>ಊ)</td><td>ಸದರಿ ಸ್ವತ್ತಿಗೆ ಸಂಬಂಧಿಸಿದಂತೆ ಸರ್ವೋಚ್ಚ ನ್ಯಾಯಾಲಯದ ಆದೇಶಗಳ ನಂತರ ಸರ್ಕಾರ/ ಮುಜರಾಯಿ ಇಲಾಖೆಗೆ ಅನ್ಯ ನ್ಯಾಯಾಲಯ ಗಳಿಂದ ತಡೆಯಾಜ್ಞೆ ಅಥವಾ ಯಥಾಸ್ಥಿತಿ ಅಥವಾ ಬೇರೆ</td><td>i) ದೇವಾಲಯಕ್ಕೆ ಸೇರಿದ 15 ಎಕರೆ 12 ಗುಂಟೆ (ಅಳತೆಯಂತೆ 13 ಎಕರೆ 12 ಗುಂಟೆ) ಜಮೀನಿನ ಸಂರಕ್ಷಣೆಗಾಗಿ ಕಾಂಪೌಂಡ್ ಗೋಡೆಯನ್ನು ನಿರ್ಮಿಸುವ ಕಾಮಗಾರಿಯನ್ನು ಕೈಗೊಳ್ಳುವ ಕುರಿತು ಜಿಲ್ಲಾಧಿಕಾರಿಗಳ ಅಧಿಕೃತ ಜ್ಞಾಪನಾ ಪತ್ರ ಸಂಖ್ಯೆ ಡಿಎಸ್.(ಎ)ಸಿಆ.10/1989-90 ದಿನಾಂಕ: 12.11.2020 ರ ಆದೇಶವನ್ನು ಪ್ರಶ್ನಿಸಿ ಶ್ರೀ ತಾಯಪ್ಪ ರವರು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಪ್ರಕರಣ ಸಂಖ್ಯೆ: WP 13506/2020ನ್ನು ದಾಖಲಿಸಿದ್ದು, ಮಾನ್ಯ ರಾಜ್ಯ ಉಚ್ಚ ನ್ಯಾಯಾಲಯವು ಯಥಾಸ್ಥಿತಿಯನ್ನು ಕಾಪಾಡಲು ಆದೇಶವನ್ನು ಹೊರಡಿಸಿದ್ದು, ಈ ಪ್ರಕರಣವನ್ನು ದೇವಾಲಯದ ಪರವಾಗಿ ಜರೂರಾಗಿ ಇತ್ಯರ್ಥ ಪಡಿಸುವ ಕುರಿತು ಅಗತ್ಯ ಕ್ರಮ ವಹಿಸಲಾಗಿದ್ದು, ಪ್ರಕರಣ ಇತ್ಯರ್ಥವಾದ ನಂತರ ಕಾಂಪೌಂಡ್ ಗೋಡೆ</td></tr>
</table>

| | | |
|---|---|---|
| | ಯಾವುದಾದರೂ ನಿರ್ದೇಶನಗಳು ಸರ್ಕಾರಕ್ಕೆ ನೀಡಲ್ಪಟ್ಟಿವೆಯೇ; (ಸಂಪೂರ್ಣ ಮಾಹಿತಿ ನೀಡುವುದು) | ನಿರ್ಮಾಣ ಮಾಡಲು ಅಗತ್ಯ ಕ್ರಮ ವಹಿಸಲಾಗುವುದು.<br>ii) ಶ್ರೀ ಧರ್ಮರಾಯ ಸ್ವಾಮಿ ದೇವಾಲಯಕ್ಕೆ ಸೇರಿದ ನೀಲಸಂದ್ರ ಗ್ರಾಮದಲ್ಲಿರುವ ಸರ್ವೆ ನಂ-79 ರಲ್ಲಿನ 4.20 ಎ/ಗು ಜಮೀನಿನ ಹಕ್ಕುದಾರಿಕೆ ಬಗ್ಗೆ ಶ್ರೀ ಸಿ.ಮುನಿಯಪ್ಪ ರವರು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಪ್ರಕರಣ ಸಂಖ್ಯೆ ಆರ್.ಎಫ್.ಎ 1702/2006 ಅನ್ನು ದಾಖಲಿಸಿದ್ದು, ಸದರಿ ಪ್ರಕರಣ ದಿ: 12.04.2021 ರಂದು ವಿಚಾರಣೆಗೆ ಬಂದಿದ್ದು, ನಂತರ ದಿ:28.05.2021ಕ್ಕೆ ನಿಗಧಿಯಾಗಿತ್ತು, ನಂತರ ಪ್ರಕರಣವು ವಿಚಾರಣೆಗೆ ಬಂದಿರುವುದಿಲ್ಲ. ಸದರಿ ಪ್ರಕರಣವನ್ನು ಜರೂರಾಗಿ ಇತ್ಯರ್ಥ ಪಡಿಸಲು ಕ್ರಮ ವಹಿಸಲಾಗುತ್ತಿದೆ.<br>iii) ಶ್ರೀ ಧರ್ಮರಾಯ ಸ್ವಾಮಿ ದೇವಾಲಯಕ್ಕೆ ಸೇರಿದ ನೀಲಸಂದ್ರ ಗ್ರಾಮದ ಸರ್ವೆ ನಂ 79ರಲ್ಲಿನ 15-12 ಎಕರ/ಗುಂಟೆ ಜಾಗದಲ್ಲಿ 22.01 ಗುಂಟೆ ಜಾಗದ ಬಗ್ಗೆ ಶ್ರೀ ಸಂಪಂಗಿರಾಮಯ್ಯ ರವರು ಮಾನ್ಯ ಸಿಟಿ ಸಿವಿಲ್ ನ್ಯಾಯಾಲಯದಲ್ಲಿ ಪ್ರಕರಣ ಸಂಖ್ಯೆ ಓ.ಎಸ್.9311/2004 ಅನ್ನು ದಾಖಲಾಗಿದ್ದು, ಸದರಿ ಪ್ರಕರಣವು ವಿಚಾರಣೆ ಹಂತದಲ್ಲಿರುತ್ತದೆ.<br>iv) ಶ್ರೀ ಧರ್ಮರಾಯ ಸ್ವಾಮಿ ದೇವಾಲಯಕ್ಕೆ ಸೇರಿದ ನೀಲಸಂದ್ರ ಗ್ರಾಮದ ಸರ್ವೆ ನಂ 79ರ 15.12 ಎಕರ/ಗುಂಟೆ ಜಾಗದಲ್ಲಿ ಸೇರಿದ 1-1.5 ಎ/ಗು. ಜಮೀನನ್ನು ಒತ್ತುವರಿ ಮಾಡಿಕೊಂಡಿರುವ ಕುರಿತು ಶ್ರೀ ಆರ್.ಆನಂದ್ ರವರು ಮಾನ್ಯ ಸಿಟಿ ಸಿವಿಲ್ ನ್ಯಾಯಾಲಯದಲ್ಲಿ ಪ್ರಕರಣ ಸಂಖ್ಯೆ ಓಎಸ್.4581/2020 ರಲ್ಲಿ ದಿನಾಂಕ:02-03-2022 ರಂದು " IA.No.5 filed by the 1st defedent under section 10A of the Karnataka Land Grabbing Prohibition Act of 2011 read with section 151 of cpc is hereby allowed. Consequently, office is directed to transfer to the case forth with to the Special Court constituted under section 7 of the above Act" ಎಂದು ಅಂತಿಮ ತೀರ್ಪನಲ್ಲಿ ಪ್ರಕರಣವನ್ನು ಕರ್ನಾಟಕ ಭೂ ಕಬಳಿಕೆ ನಿಷೇಧ ಕಾಯಿದೆ 2011ರ ಕಲಂ 07ರಡಿಯಲ್ಲಿ ಭೂ ಕಬಳಿಕೆ ನಿಷೇದ ವಿಶೇಷ ನ್ಯಾಯಾಲಯಕ್ಕೆ ವರ್ಗಾಯಿಸಿರುತ್ತದೆ.<br>v) ಶ್ರೀ ಧರ್ಮರಾಯಸ್ವಾಮಿ ದೇವಾಲಯಕ್ಕೆ ಸೇರಿದ ನೀಲಸಂದ್ರ ಗ್ರಾಮದ ಸರ್ವೆ ನಂ 79ರಲ್ಲಿನ 15-12 ಗುಂಟೆ ಜಮೀನಿನ ಒತ್ತುವರಿ ಮಾಡಿಕೊಂಡಿರುವ ಕುರಿತು ಶ್ರೀ ಸಿ ಮುನಿಯಪ್ಪ ರವರು ಮಾನ್ಯ ವಿಶೇಷ ನ್ಯಾಯಾಲಯದಲ್ಲಿ ಪ್ರಕರಣ ಸಂಖ್ಯೆ ಆರ್ ಆರ್. ಟಿ (2)16/2007-08 ಅನ್ನು ದಾಖಲಿಸಿದ್ದು ಸದರಿ ಪ್ರಕರಣವನ್ನು ಆದೇಶಕ್ಕೆ ಕಾಯ್ದಿರಿಸಲಾಗಿದೆ |
| ಬ) | ದಿನಾಂಕ:07.12.1992ರಿಂದ ನೀಲಸಂದ್ರ ಗ್ರಾಮದ ಸರ್ವೆ ಸಂ.79ರಲ್ಲಿ ಜಮೀನು ಒಟ್ಟು ವಿಸ್ತೀರ್ಣ 15 ಎಕರ 12 ಗುಂಟೆ ಸ್ವತ್ತು ಪೂರ್ಣ ಮುಜರಾಯಿ ಇಲಾಖೆಯ ವಶದಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಪ್ರಸ್ತುತ ಸದರಿ ಜಮೀನಿನಲ್ಲಿ ಒತ್ತುವರಿಯಾದ ಭೂ ವಿಸ್ತೀರ್ಣದ ಪ್ರಮಾಣವೆಷ್ಟು; (ವಿವರ ನೀಡುವುದು) ಒತ್ತುವರಿಯಾಗಿದ್ದಲ್ಲಿ, ಕಾರಣಗಳೇನು; ಒತ್ತುವರಿ ಭೂಮಿಯನ್ನು ಮರಳಿ ವಶಕ್ಕೆ ಪಡೆಯಲು ಸರ್ಕಾರಕ್ಕೆ ಗೊಂಡಿರುವ ಕ್ರಮಗಳೇನು? (ವಿವರ | ದಿನಾಂಕ:07-12-1992 ರಿಂದ ನೀಲಸಂದ್ರ ಗ್ರಾಮದ ಸರ್ವೆ ನಂಬರ್ 79 ರಲ್ಲಿನ ಜಮೀನು ಇಟ್ಟು ವಿಸ್ತೀರ್ಣ 15-12 ಎಕರೆ-ಗುಂಟೆ ಸ್ವತ್ತು ಇಲಾಖೆಯ ವಶದಲ್ಲಿರುತ್ತದೆ.<br>ನೀಲಸಂದ್ರ ಗ್ರಾಮದ ಸರ್ವೆ ನಂ-79 ಹಾಗೂ ಕೋರಮಂಗಲ ಗ್ರಾಮದ ಸರ್ವೆ-36ರಲ್ಲಿನ ಒತ್ತುವರಿಯನ್ನು ಗುರುತಿಸಲು ಜಂಟಿ ನಕ್ಷೆಯನ್ನು ತಯಾರಿಸಿದ್ದು, ಸದರಿ ಸರ್ವೆ ನಂಬರ್‌ಗಳಲ್ಲಿ ಸುಮಾರು 216 ಒತ್ತುವರಿದಾರರು ಅನಧಿಕೃತವಾಗಿ ಮನೆಗಳನ್ನು ನಿರ್ಮಿಸಿದ್ದು, ಒತ್ತುವರಿ ವಿಸ್ತೀರ್ಣ 17914.69 ಚದರ ಮೀಟರ್ ಆಗಿದ್ದು (ಸುಮಾರು 4 ಎಕರೆ 17 ಗುಂಟೆ) ಸದರಿ ಒತ್ತುವರಿ ಪೈಕಿ 14 ಒತ್ತುವರಿದಾರರು ಕೋರಮಂಗಲ ಗ್ರಾಮದ ಸರ್ವೆ ನಂ-36ರಲ್ಲಿಯೂ 190 ಒತ್ತುವರಿದಾರರು ನೀಲಸಂದ್ರ ಗ್ರಾಮದ ಸರ್ವೆ ನಂ-79ರಲ್ಲಿಯೂ, 12 ಒತ್ತುವರಿದಾರರು ಭಾಗಶಃ ಎರಡು ಗ್ರಾಮದ ಸರ್ವೆ ನಂಬರ್‌ಗಳಲ್ಲಿ ಒತ್ತುವರಿ ಮಾಡಿ ಅನಧಿಕೃತ ಕಟ್ಟಡಗಳನ್ನು ನಿರ್ಮಿಸಿರುತ್ತಾರೆ.<br>ಈ ದೇವಾಲಯದ ಸರ್ವೆ ನಂಬರ್ 79 ರಲ್ಲಿ ಓ.ಎಸ್. ನಂ-9311/2004ರ ಮೇರೆಗೆ ಮಾನ್ಯ ಸಿಟಿ ಸಿವಿಲ್ ನ್ಯಾಯಾಲಯ, ಬೆಂಗಳೂರು ಇಲ್ಲಿ ಖರಾಬು ಸೇರಿ 0.23 ಗುಂಟೆ ವಿಸ್ತೀರ್ಣ ಬಾಬ್ತು ಪ್ರಕರಣ ದಾಖಲಾಗಿದ್ದು, ಈ ಪೈಕಿ 0-04 ಗುಂಟೆ ವಿಸ್ತೀರ್ಣ ಶ್ರೀ ಸಂಪಂಗಿರಾಮ ಬಿನ್ ಸಂಪಂಗಿ ಹಾಗೂ ಇತರರಿಂದ ಒತ್ತುವರಿಯಾಗಿರುತ್ತದೆ.<br>ಮೇಲ್ಕಂಡ ಜಂಟಿ ಅಳತೆಯ ವರದಿಯಂತೆ ಪ್ರಸ್ತಾಪಿತ ಜಮೀನಿನಲ್ಲಿ ಒಟ್ಟು 216 ಜನ ಅನಧಿಕೃತ ಒತ್ತುವರಿದಾರರಿದ್ದು, ದಿನಾಂಕ:12.10.2020 ರಂದು ಹೆಚ್ಚುವರಿ 13 ಜನ ಅನಧಿಕೃತ |

| | |
|---|---|
| ನೀಡುವುದು) | ಒತ್ತುವರಿದಾರರನ್ನು ಗುರುತಿಸಿ (ಒಟ್ಟು 216+13=229 ಒತ್ತುವರಿದಾರರು) ಸದರಿ 13 ಒತ್ತುವರಿದಾರರ ವಿರುದ್ಧ ಸಂಬಂಧಿಸಿದ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ದಾಖಲು ಮಾಡಲಾಗಿದೆ..<br><br>ಪ್ರಸ್ತಾಪಿತ ದೇವಾಲಯಕ್ಕೆ ಸೇರಿದ ನೀಲಸಂದ್ರ ಗ್ರಾಮದ ಸರ್ವೇ ನಂ. 79 ರಲ್ಲಿನ 4 ಎಕರೆ 20 ಗುಂಟೆ ಜಮೀನಿನ ಹಕ್ಕುದಾರಿಕೆಯನ್ನು ಕೋರಿ , ಬೆಂಗಳೂರಿನ 8ನೇ ಅಡಿಷನಲ್ ಸಿಟಿ ಸಿವಿಲ್ ಇವರ ನ್ಯಾಯಾಲಯದಲ್ಲಿ ಶ್ರೀ ಸಿ.ಮುನಿಯಪ್ಪ ರವರ ವಾರಸುದಾರರಾದ ಶ್ರೀ ಎಂ.ಮುನಿಸ್ವಾಮಿ ಹಾಗೂ ಇತರರು ದಾಖಲ್ಮಾಡಿದ ಮೂಲದಾವೆ ಸಂ:6246/1997 ಅನ್ನು ಸಿವಿಲ್ ನ್ಯಾಯಾಲಯವು ದಿನಾಂಕ:02.03.2006ರಂದು ವಜಾಗೊಳಿಸಿದ್ದು, ಸದರಿ ತೀರ್ಪಿನ ವಿರುದ್ಧ ವಾದಿಯವರು ಮಾನ್ಯ ಉಚ್ಛ ನ್ಯಾಯಾಲಯದಲ್ಲಿ ಆರ್‌ಎಫ್‌ಎ.ಸಂ:1702/2006 ಅನ್ನು ದಾಖಲಾಗಿದ್ದು, ಸದರಿ ಪ್ರಕರಣಗಳಲ್ಲಿ ತಾತ್ಕಾಲಿಕ ನಿರ್ಬಂದಾಜ್ಞೆ ಕೋರಿ ಸಲ್ಲಿಸಿದ ಮಧ್ಯಾವಧಿ ಅರ್ಜಿಯನ್ನು ಮಾನ್ಯ ಉಚ್ಛ ನ್ಯಾಯಾಲಯವು ದಿ:26.08.2015ರಂದು ವಜಾಗೊಳಿಸಿರುತ್ತದೆ ಮಾನ್ಯ ಉಚ್ಛ ನಾಯಾಲಯವು ದಿನಾಂಕ:26.08.2015ರ ಮಧ್ಯಂತರ ಆದೇಶದ ವಿರುದ್ಧ ವಾದಿಯವರು ಮಾನ್ಯ ಸರ್ವೋಚ್ಛ ನ್ಯಾಯಾಲಯದಲ್ಲಿ ದಾಖಲಾಡಿದ ಎಸ್‌ಎಲ್‌ಪಿ ಸಂ: 34901/2015 ಅನ್ನು ಮಾನ್ಯ ಸರ್ವೋಚ್ಛ ನ್ಯಾಯಾಲಯವು ದಿನಾಂಕ:06.07.2017 ರಂದ ವಜಾಗೊಳಿಸಿರುತ್ತದೆ. ಪ್ರಸ್ತುತ ಮಾನ್ಯ ಉಚ್ಛ ನ್ಯಾಯಾಲಯದಲ್ಲಿ ಆರ್.ಎಫ್.ಎ ಸಂಖ್ಯೆ 1702/2006 ರ ಪ್ರಕರಣವು ಬಾಕಿ ಇರುತ್ತದೆ.<br><br>ಈ ಸರ್ವೆ ನಂಬರನಲ್ಲಿರುವ ಅನಧಿಕೃತದಾರರನ್ನು ತೆರವುಗೊಳಿಸಲು ಒತ್ತುವರಿ ತೆರವು ಕಾರ್ಯಾಚರಣೆ ಮಾಡಿ ತೆರವುಗೊಳಿಸಲಾಗಿರುವ 9-00 ಎಕರೆ ಜಮೀನಿಗೆ ಕಾಂಪೌಂಡ್ ನಿರ್ಮಿಸಲು ರೂ.80.00ಲಕ್ಷಗಳ ಅಂದಾಜುಪಟ್ಟಿ ಮತ್ತು ನಕ್ಷೆಗೆ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಿ, ಕಾಮಗಾರಿಯನ್ನು ಕೆ.ಆರ್.ಐ.ಡಿ.ಎಲ್.ರವರಿಗೆ ವಹಿಸಲಾಗಿರುತ್ತದೆ. ಸದರಿ ಕಾಮಗಾರಿಯ 1/3 ಭಾಗದ ಮೊದಲನೇ ಕಂತಿನ ಬಾಬು ರೂ.26.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.<br><br>ಪ್ರಸ್ತಾಪಿತ ಸ್ಥಳವನ್ನು ಮೋಜಣಿದಾರರು ಸರ್ವೆ ಮಾಡಿ ತಯಾರಿಸಿರುವ ನಕ್ಷೆಯಲ್ಲಿ ತೋರಿಸಿರುವಂತೆ ಕಾಂಪೌಂಡ್ ಗೋಡೆ ನಿರ್ಮಾಣ ಮಾಡಬೇಕಾಗಿರುವ ಸ್ಥಳವನ್ನು " ಭೂಮಿ ಹಸ್ತಾಂತರ ಪತ್ರ" ದ ಮೂಲಕ ಕಾರ್ಯಪಾಲಕ ಅಭಿಯಂತರರು, ಕೆ.ಆರ್.ಐ.ಡಿ.ಎಲ್. ಸಂಸ್ಥೆ ದಿನಾಂಕ:28.01.2019 ರಂದು ಜಮೀನನ್ನು ಹಸ್ತಾಂತರಿಸಲಾಗಿದೆ.<br><br>ದಿನಾಂಕ:18.11.2019ರಂದು ಕೆ.ಆರ್.ಐ.ಡಿ.ಎಲ್. ಸಿಬ್ಬಂದಿಗಳು ಮತ್ತು ಕಾರ್ಯ ನಿರ್ವಾಹಕ ಅಧಿಕಾರಿಗಳು ಸಿಬ್ಬಂದಿಗಳೊಂದಿಗೆ ಕಾಂಪೌಂಡ್ ಕಾಮಗಾರಿಯನ್ನು ಪ್ರಾರಂಭಿಸಲು ಸ್ಥಳಕ್ಕೆ ಭೇಟಿ ನೀಡಿದಾಗ ನೀಲಸಂದ್ರ ಗ್ರಾಮದ ಸ್ಥಳೀಯರು ಕಾಮಗಾರಿಯನ್ನು ಪ್ರಾರಂಭಿಸಲು ಅವಕಾಶ ನೀಡದೆ ಗುಂಪುಗೂಡಿ ಪ್ರತಿಭಟನೆ ಮಾಡಿದ್ದರಿಂದ ಕಾಮಗಾರಿಯನ್ನು ಪ್ರಾರಂಭಿಸಲು ಸಾಧ್ಯವಾಗಿರುವುದಿಲ್ಲ. ಪೊಲೀಸ್ ಬಂದೋಬಸ್ತ್ ಪಡೆದು ಕಾಮಗಾರಿ ಪ್ರಾರಂಭಿಸಬೇಕಾಗಿರುತ್ತದೆ. ದಿನಾಂಕ: 22.01.2020ರಂದು ಕಾರ್ಯಪಾಲಕ ಅಧಿಕಾರಿಗಳೊಂದಿಗೆ ಹಾಗೂ ಕಛೇರಿಯ ಸಿಬ್ಬಂದಿಯವರೊಂದಿಗೆ ಸ್ಥಳಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಅನಧಿಕೃತವಾಗಿ ಸುಮಾರು ಮನೆಗಳು ನಿರ್ಮಿಸುತ್ತಿರುವುದು ಕಂಡುಬಂದಿದ್ದು, ಸದರಿ ಜಮೀನಿನಲ್ಲಿ ಅನಧಿಕೃತವಾಗಿ ನಿರ್ಮಿಸಿರುವ ಮನೆಗಳನ್ನು ಕೂಡಲೇ ಸ್ಥಗಿತಗೊಳಿಸಲು ಕ್ರಮ ಕೈಗೊಳ್ಳಲು ಸಹಾಯಕ ಆಯುಕ್ತರು, ನಗರ ಸಭಾವಲಯ, ಬೆಂಗಳೂರು ಪೊಲೀಸ್ ಇನ್ಸ್ ಪೆಕ್ಟರ್ ಅಶೋಕ್ ನಗರ ಪೊಲೀಸ್ ಠಾಣೆ, ಅಶೋಕ್ ನಗರ, ಬೆಂಗಳೂರು ಇವರಿಗೆ ಕೋರಲಾಗಿರುತ್ತದೆ.<br><br>ಈ ದೇವಾಲಯಕ್ಕೆ ಸೇರಿದ ಸ್ವತ್ತನ್ನು ಸಂರಕ್ಷಿಸಲು ಕಾಂಪೌಂಡ್ ನಿರ್ಮಾಣ ಮಾಡಲು ಪೊಲೀಸ್ ಸಿಬ್ಬಂದಿಯ ಬಂದೋಬಸ್ತನ್ನು ನೀಡುವಂತೆ ಕೋರಿ ಸಹಾಯಕ ಪೊಲೀಸ್ ಕಮಿಷನರ್, ಅಶೋಕ್ ನಗರ ಪೊಲೀಸ್ ಠಾಣೆ ಇವರಿಗೆ ಪತ್ರ ಬರೆಯಲಾಗಿದೆ. |

ಸಂಖ್ಯೆ: ಕಂಇ 104 ಮುಸಪ್ರ 2022

(ಶಶಿಕಲಾ. ಅ. ಜೊಲ್ಲೆ)
ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು.